11

## ಕೋರೋನಾ ವೈರಸ್‌ನಿಂದ ಮರಣಹೊಂದಿದವರಿಗೆ ಸಂಬಂಧಿಸಿದ

# ಕರ್ಮಶಾಸ್ತ್ರ ನಿಯಮಗಳು






مدرسة الصفة الإسلامية

**MADRASATU SUFFAH AL ISLAMIYYA**
SKYWAY COMPLEX, 6TH BLOCK, KRISHNAPURA,
SURATKAL, MANGALORE - 575 014
PH: 0824-2271449 MOB: 8722695551

1. ಮೂಲ ನಿಯಮದ ಪ್ರಕಾರ, ಕೊರೋನಾ ವೈರಸ್‌ನಿಂದ ಮರಣಹೊಂದಿದ ವ್ಯಕ್ತಿಯ ಮೃತದೇಹವನ್ನು ಇತರ ಮೃತದೇಹಗಳಂತೆಯೇ ಪರಿಗಣಿಸತಕ್ಕದ್ದು. ಆದ್ದರಿಂದ ಕೊರೋನಾ ವೈರಸ್‌ನಿಂದ ಮರಣಹೊಂದಿದ ವ್ಯಕ್ತಿಯ ಮೃತದೇಹವನ್ನು ಇತರ ಮೃತದೇಹಗಳಂತೆ ಸ್ನಾನ ಮಾಡಿಸಿ ಕಫನ್ ಮಾಡತಕ್ಕದ್ದು. ಜನಾಝ ನಮಾಝ್ ನಿರ್ವಹಿಸತಕ್ಕದ್ದು ಮತ್ತು ಮುಸಲ್ಮಾನರ ಕಬರ ಸ್ಥಾನದಲ್ಲೇ ದಫನ ಮಾಡತಕ್ಕದ್ದು.

2. ಆದರೆ ಮೃತದೇಹವನ್ನು ಸ್ನಾನ ಮಾಡಿಸುವುದರಿಂದ ಇತರರಿಗೆ ಅಪಾಯ ಇದೆ ಎಂದು ತಜ್ಞರು ಹೇಳಿದರೆ, ಅಥವಾ ಅದರಿಂದ ಸ್ನಾನ ಮಾಡಿಸುವವನಿಗೂ ಕಾಯಿಲೆ ಹರಡಬಹುದೆಂದು ಅವರು ಆತಂಕ ವ್ಯಕ್ತಪಡಿಸಿದರೆ, ಸುರಕ್ಷಿತ ಅಂತರವನ್ನಿಟ್ಟುಕೊಂಡು ನೀರನ್ನು ಸುರಿದು ಮೃತದೇಹಕ್ಕೆ ಸ್ನಾನ

ಮಾಡಿಸಲು ಸಾಧ್ಯವಾಗುವುದಾದರೆ ಅದನ್ನು ಮಾಡತಕ್ಕದ್ದು. ಮೃತದೇಹವನ್ನು ಸ್ನಾನ ಮಾಡಿಸಲು ಇಷ್ಟು ಮಾಡಿದರೆ ಸಾಕೆಂದು ನಾವು ಅಭಿಪ್ರಾಯ-ಪಡುತ್ತೇವೆ.

3. ಆದರೆ ಸುರಕ್ಷಿತ ಅಂತರದಿಂದಲೂ ಮೃತದೇಹಕ್ಕೆ ಸ್ನಾನ ಮಾಡಿಸಲು ಸಾಧ್ಯವಿಲ್ಲ ಎಂದಾದರೆ ಸ್ನಾನ ಮಾಡಿಸುವ ಬದಲು ತಯಮ್ಮುಂ ಮಾಡತಕ್ಕದ್ದು.

4. ಇನ್ನು ತಯಮ್ಮುಂ ಮಾಡುವುದು ಕೂಡ ಅಪಾಯ-ಕಾರಿ ಎಂದು ತಜ್ಞರು ಹೇಳಿದರೆ ತಯಮ್ಮುಂ ಮಾ-ಡಬಾರದು. ಇಂತಹ ಸ್ಥಿತಿಯಲ್ಲಿ ಆ ಮೃತದೇಹದ ಅವಸ್ಥೆಯು "ಫಾಕಿದು ತ್ತಹೂರೈನ್" [ಎರಡು ವಿಧದ ಶುದ್ಧೀಕರಣಗಳನ್ನೂ (ನೀರು ಮತ್ತು ತಯಮ್ಮುಂ) ಕಳಕೊಂಡ ವ್ಯಕ್ತಿ] ಆಗಿರುತ್ತದೆ. ಅಥವಾ ಎರಡರಲ್ಲಿ ಯಾವುದಾದರೂ ಒಂದು ವಿಧದ ಶುದ್ಧೀಕರಣವನ್ನು ಕಳಕೊಂಡ ವ್ಯಕ್ತಿ ಎಂದಾಗಿರುತ್ತದೆ.

5. ನಂತರ ಸಾಧ್ಯವಾದರೆ ಮೃತದೇಹಕ್ಕೆ ಕಫನ್ ಮಾಡತಕ್ಕದ್ದು.

6. ಆದರೆ ಅಪಾಯವಿರುವ ಕಾರಣ ಇಸ್ಲಾಮೀ ಕಾನೂನಿನ ಪ್ರಕಾರ ಕಫನ್ ಮಾಡಲು ಸಾಧ್ಯವಾಗದಿದ್ದರೆ, ಮೃತದೇಹವನ್ನು ಕುಟುಂಬಕ್ಕೆ ಹಸ್ತಾಂತರಿಸುವುದಕ್ಕೆ ಮುಂಚೆ ಆರೋಗ್ಯ ಅಧಿಕಾರಿಗಳು ಹೊದಿಸಿದ ಹೊದಿಕೆಯನ್ನೇ ಕಫನ್ ಎಂದು ಪರಿಗಣಿಸಿದರೆ ಸಾಕು. ಈ ಹೊದಿಕೆಯನ್ನು ಬಿಚ್ಚಿದರೆ ಅಪಾಯವಾಗಬಹುದು ಎಂದು ತಜ್ಞರು ಹೇಳಿದರೆ ಹೊದಿಕೆಯನ್ನು ಬಿಚ್ಚಬಾರದು.

7. ಮೃತದೇಹವನ್ನು ಅದೇ ಸ್ಥಿತಿಯಲ್ಲಿ (ಹೊದಿಕೆಯೊಂದಿಗೆ) ಮುಸಲ್ಮಾನರ ಕಬರ ಸ್ಥಾನದಲ್ಲಿ ದಫನ ಮಾಡತಕ್ಕದ್ದು.

8. ಜನಾಝ ನಮಾಝ್ ನಿರ್ವಹಿಸಲು ಸಾಧ್ಯವಾಗುವು-

ದಾದರೆ, ಮುಸಲ್ಮಾನರಲ್ಲಿ ಯಾರಾದರೂ ಇದನ್ನು ನಿರ್ವಹಿಸತಕ್ಕದ್ದು.

9. ಜನಾಝ ನಮಾಝ್ ನಿರ್ವಹಿಸಲು ಸಾಧ್ಯವಾಗದಿದ್ದರೆ, ಉದಾಹರಣೆಗೆ, ಮೃತದೇಹವನ್ನು ಕುಟುಂಬಕ್ಕೆ ಹಸ್ತಾಂತರ ಮಾಡದೇ ಸಂಬಂಧಪಟ್ಟ ಅಧಿಕಾರಿಗಳೇ ಅದನ್ನು ದಫನ ಮಾಡುವುದಾದರೆ, ಆಸ್ಪತ್ರೆಯಲ್ಲಿ ಯಾರಾದರೂ ಮುಸ್ಲಿಂ ವೈದ್ಯರಿದ್ದರೆ ದಫನ ಮಾಡುವ ಮೊದಲು ಅವರು ಜನಾಝ ನಮಾಝ್ ನಿರ್ವಹಿಸತಕ್ಕದ್ದು.

ಆದರೆ ಅಲ್ಲಿ ಮುಸ್ಲಿಂ ವೈದ್ಯರು ಇಲ್ಲದಿದ್ದರೆ, ದಫನ ಮಾಡಿದ ಸ್ಥಳಕ್ಕೆ ತೆರಳಿ ಜನಾಝ ನಮಾಝ್ ನಿರ್ವಹಿಸತಕ್ಕದ್ದು. ಆದರೆ ಆ ಸ್ಥಳ ಯಾವುದೆಂದು ಗೊತ್ತಿಲ್ಲದಿದ್ದರೆ, ಅಥವಾ ಆ ಸ್ಥಳಕ್ಕೆ ತೆರಳಲು ಅಧಿಕಾರಿಗಳು ನಿರ್ಬಂಧ ಹೇರಿದರೆ, ಸರಿಯಾದ ಅಭಿಪ್ರಾಯ

ಪ್ರಕಾರ ಇಂತಹ ಸ್ಥಿತಿಯಲ್ಲಿ ಅನುಪಸ್ಥಿತಿಯ ಜನಾಝ ನಮಾಝ್ (ಗಾಇಬ್) ನಿರ್ವಹಿಸತಕ್ಕದ್ದು. ಹೆಚ್ಚು ಬಲ್ಲವನು ಅಲ್ಲಾಹು.

الحركة النصيحة الإسلامية
**ANNASEEHA ISLAMIC MOVEMENT**
SURATKAL, MANGALORE - 575 014
MOB: 9731593091 / 9945171612

**Jamiyathe Ahle Hadees Mangalore**